# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2014
ಸದಸ್ಯರ ಹೆಸರು : ಶ್ರೀ ಆರ್.ಪ್ರಸನ್ನಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 27.03.2020
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಗ್ರಾಮ ಪಂಚಾಯತಿಗಳಲ್ಲಿ ಈ ಸ್ವತ್ತು ಮೂಲಕ ನಮೂನೆ-9, 11ಎ ಮತ್ತು 11ಬಿ ವಿತರಿಸಲು ನಿಗದಿಗೊಳಿಸಿರುವ ಮಾನದಂಡಗಳ ಉಲ್ಲಂಘನೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಆ) | ಬಂದಿದ್ದಲ್ಲಿ, ಯಾವ ಕ್ರಮ ಕೈಗೊಳ್ಳಲಾಗಿದೆ; ಹಳೆಯ ಗ್ರಾಮ ಠಾಣಾ ನಕ್ಷೆಗೂ ಈಗ ವಾಸ ಮಾಡುತ್ತಿರುವ ವಸತಿ ಪ್ರದೇಶಗಳಿಗೂ ವ್ಯತ್ಯಾಸವಿದ್ದು, ನಮೂನೆ-9, 11ಎ ಮತ್ತು 11ಬಿ ಪಡೆಯಲು ಗ್ರಾಮೀಣ ಪ್ರದೇಶದ ಜನರಿಗೂ ತೊಂದರೆಯಾಗುತ್ತಿದ್ದು, ಹೊಸದಾಗಿ ಸರ್ವೆ ಮಾಡಿ ಗ್ರಾಮ ಠಾಣಾ ಹದ್ದುಬಸ್ತು ಗುರುತಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ? (ವಿವರ ನೀಡುವುದು) | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ನಿಯಮಗಳು, ಸುತ್ತೋಲೆಗಳು ಮತ್ತು ಆಗಿಂದಾಗ್ಗೆ ಸರ್ಕಾರದ ಪತ್ರಗಳ ಮೂಲಕ ನೀಡುವ ನಿರ್ದೇಶನಗಳನ್ನು ಉಲ್ಲಂಘಿಸಿ ನಮೂನೆ 9, 11ಎ ಮತ್ತು ನಮೂನೆ 11ಬಿ ವಿತರಿಸಲು ಕಾರಣಕರ್ತರಾದ ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳು ಮತ್ತು ಗ್ರಾಮ ಪಂಚಾಯತಿ ಕಾರ್ಯದರ್ಶಿಗಳ ವಿರುದ್ಧ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರಂತೆ ಶಿಸ್ತು ಕ್ರಮ ಕೈಗೊಳ್ಳಲು ಜಿಲ್ಲಾ ಪಂಚಾಯತ್ ಮತ್ತು ತಾಲ್ಲೂಕು ಪಂಚಾಯತ್ ಅಧಿಕಾರಿಗಳು ಕ್ರಮ ಕೈಗೊಳ್ಳುವಂತೆ ಈಗಾಗಲೇ ತಿಳಿಸಲಾಗಿದೆ.<br><br>ಮುಂದುವರೆದು, ಗ್ರಾಮ ಪಂಚಾಯಿತಿ ಅಧ್ಯಕ್ಷರು, ಉಪಾಧ್ಯಕ್ಷರು ಮತ್ತು ಸದಸ್ಯರುಗಳು ನಿಯಮಬಾಹಿರವಾಗಿ ನಮೂನೆ 9, 11ಎ ಮತ್ತು 11ಬಿ ವಿತರಿಸಲು ಕಾರಣರಾದಲ್ಲಿ ದುರ್ವತನೆ ಎಂದು ಪರಿಗಣಿಸಿ, ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 43(ಎ), 48(4) ಮತ್ತು 48(5) ರನ್ವಯ ಕ್ರಮವಾಗಿ ಗ್ರಾಮ ಪಂಚಾಯಿತಿ ಸದಸ್ಯತ್ವ, ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನದಿಂದ ತೆಗೆದುಹಾಕಲು ಸಂಬಂಧಿಸಿದ ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲು ಕ್ರಮ ವಹಿಸುವಂತೆ ತಿಳಿಸಲಾಗಿದೆ.<br><br>ಗ್ರಾಮಠಾಣಾ ವ್ಯಾಪ್ತಿಯಲ್ಲಿ ಆಸ್ತಿಯನ್ನು ಹೊಂದಿರುವ ಮಾಲೀಕರು ಗ್ರಾಮ ಪಂಚಾಯತಿಗೆ ನಮೂನೆ-9 ಮತ್ತು 11ಎ ನೀಡಲು ಅರ್ಜಿ ಸಲ್ಲಿಸಿದ್ದಲ್ಲಿ ಗ್ರಾಮ ಪಂಚಾಯತಿಯ ಪಂಚಾಯತಿ ಅಭಿವೃದ್ಧಿ ಅಧಿಕಾರಿಯು ಆನ್‌ಲೈನ್ ಮೂಲಕ ಗ್ರಾಮ ಠಾಣಾ ಸ್ಕೇಚ್ ನೀಡಲು ಸರ್ವೆ ಇಲಾಖೆ (ಮೋಜಣಿ) ಗೆ ಅರ್ಜಿ ಸಲ್ಲಿಸುವರು. ಸರ್ವೆ ಇಲಾಖೆಯು ಗ್ರಾಮಠಾಣಾ ಸ್ಕೇಚ್ ಅನ್ನು ನೀಡಿದ ನಂತರ ನಿಯಮಾನುಸಾರ ನಮೂನೆ-9 ಮತ್ತು 11ಎ ಅನ್ನು ಇ-ಸ್ವತ್ತು ತಂತ್ರಾಂಶದ ಮೂಲಕ ವಿತರಿಸುವರು. ಸರ್ವೆ ಇಲಾಖೆಯಿಂದ ನಿಗದಿತ ಸಮಯದಲ್ಲಿ ಗ್ರಾಮಠಾಣಾ ಸ್ಕೇಚ್ ನೀಡದಿರುವುದರಿಂದ ಗ್ರಾಮ ಪಂಚಾಯತಿಯ ಪಂಚಾಯತಿ ಅಭಿವೃದ್ಧಿ ಅಧಿಕಾರಿಯು ಸಕಾಲದಲ್ಲಿ ನಮೂನೆ-9 ಮತ್ತು 11ಎ ವಿತರಿಸಲು ಸಾಧ್ಯವಾಗುವುದಿಲ್ಲ.<br><br>ಗ್ರಾಮ ಪಂಚಾಯತಿ ವ್ಯಾಪ್ತಿಯ ಗ್ರಾಮಗಳ ಗ್ರಾಮಠಾಣಾ ಗಡಿ ತುಂಬಾ ಹಿಂದೆ ನಿಗಧಿಪಡಿಸಿದ್ದು, ಪ್ರಸ್ತುತ ವಿಸ್ತರಣೆಯಾಗಿರುವ ಪ್ರದೇಶ ಒಳಗೊಂಡಂತೆ ಹೊಸದಾಗಿ ಸರ್ವೆ ಮಾಡಿಸಿ ಗ್ರಾಮಠಾಣಾವನ್ನು ಪುನರ್ ನಿಗದಿಪಡಿಸುವ ಬಗ್ಗೆ ಕಂದಾಯ ಮತ್ತು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಜಂಟಿಯಾಗಿ ದಿನಾಂಕ:28-10-2016 ರಂದು ಸುತ್ತೋಲೆ ಹೊರಡಿಸಲಾಗಿದೆ. |

ಸಂ. ಗ್ರಾಅಪ 332 ಗ್ರಾಪಂಅ 2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು